|| ಸಿರಿಗನ್ನಡಂ ಗೆಲ್ಗೆ ||

# ವೈ.ವಾ. ಭೀಮಾಚಾರ್ಯ ವಡವಿ(ಕಾವ್ಯರತ್ನ) ಇವರ ಜೀವನ ಚರಿತ್ರ.

(ಬರೆದವ:—ವಡವಿ ಹನುಮ.)

ಕದರಮಂಡಲಗಿಯೆಂಬದೊಂದು ಗ್ರಾಮ. ಇದು ಧಾರವಾಡ ಜಿಲ್ಹೆಯ ರಾಣೇಬೆನ್ನೂರ ತಾಲೂಕಿನಲ್ಲಿ ಇರುವದು. ಈ ಊರಲ್ಲಿ ಪುರಾಣ ಪ್ರಸಿದ್ಧನಾದ ಮಾರುತಿರಾಯನು ನೆಲೆಸಿರುವದರಿಂದ, ಇದು ಪುಣ್ಯಸ್ಥಳವೆನಿಸಿಕೊಂಡಿರುವದು.

ಇಂಥ ಪುಣ್ಯಕರವಾದ ಸ್ಥಳದಲ್ಲಿ ವಡವಿ ಹನುಮಂತಾಚಾರ್ಯರೆಂಬವರೊಬ್ಬರು ವಾಸವಾಗಿದ್ದರು. ಇವರಿಗೆ ಯಮುನಾಬಾಯಿಯೆಂಬ ಸುಶೀಲಳೂ ಸಾಧ್ವಿಶಿರೋಮಣಿಯೂ ಆದ ಪತ್ನಿಯಿದ್ದಳು. ಈ ಪುಣ್ಯಶೀಲ ದಂಪತಿಗಳ ಗರ್ಭದಲ್ಲಿಯೇ ಈ ಗ್ರಂಥದ ಲೇಖಕರೂ ನನ್ನ ಪೂಜ್ಯ ಪಿತೃಗಳೂ ಆದ ಭೀಮಾಚಾರ್ಯರವರು ಶಾಲಿವಾಹನ ಶಕದ ೧೮೦೫ನೇ ಸುಭಾನು ಸಂವತ್ಸರದ ಚೈತ್ರ ಕೃಷ್ಣ ೩ ಬುಧವಾರ ದಿವಸ ಜನ್ಮವೆತ್ತಿದರು. ೫ ವರ್ಷದವರಾಗುತ್ತಲೆ ಅದೇ ಊರಲ್ಲಿರುವ ಪ್ರಾಥಮಿಕ ಶಾಲೆಯಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಪ್ರಾರಂಭ ಮಾಡಿದರು. ಕುಶಾಗ್ರಬುದ್ಧಿಯವರಾದ್ದರಿಂದ, ಪ್ರಾಥಮಿಕ ಶಿಕ್ಷಣವನ್ನು ಬೇಗನೆ ಮುಗಿಸಿ ಟ್ರೇನಿಂಗ ಕಾಲೇಜನ್ನು ಸೇರಿದರು. ಅಲ್ಲಿಯಾದರೂ ಒಳ್ಳೇ ವಿದ್ವಾಂಸರೆನಿಸಿಕೊಂಡು, ಮೂರನೇ ವರ್ಷದ ಸರ್ಟಿಫಿಕೇಟನ್ನು ಸಂಪಾದಿಸಿ, ಶಿಕ್ಷಣ ಖಾತೆಯ ನೌಕರಿಯಲ್ಲಿ ಸೇರಿದರು.

ಇವರ ಒಲವು ಚಿಕ್ಕಂದಿನಿಂದಲೆ ಭಗವದ್ಭಕ್ತಿಯ ಕಡೆಗೇ ವಿಶೇಷವಾಗಿತ್ತು. ಅದಕ್ಕೆ ಇವರಲ್ಲಿರುವ ವಿದ್ವತ್ತೆಯೂ ಶೋಧಕಬುದ್ಧಿಯೂ ಜೋಡಾದ್ದರಿಂದ, ಇವರು ಅನೇಕ, ಭಗವದ್ಭಕ್ತರ ಚರಿತ್ರಗಳನ್ನು ಶೋಧಿಸಿ ಬರೆದರು. ಅವುಗಳನ್ನೆಲ್ಲ ಮುಂದೆ ವರ್ಣಿಸುವೆನು. ಇರಲಿ.

ನಂತರ ಇವರು ಬೆಳಗಾವಿಯಲ್ಲಿ ೧೯೨೧ನೇ ಇಸ್ವಿಯಲ್ಲಿ ಜರುಗಿದ ಕಲಕತ್ತಾ ಸಾಹಿತ್ಯ ಪರೀಕ್ಷೆಗೆ ಕುಳಿತರು. ಆಗ ಇವರ ವಿದ್ವತ್ತೆಯು ಮತ್ತಿಷ್ಟು

ಪ್ರಕಟವಾಗಿ ಇವರಿಗೆ 'ಕಾವ್ಯರತ್ನ' ಎಂಬ ಪ್ರಶಿಸ್ತಿಯು ಲಭಿಸಿತು.

ಆ ಮೇಲೆ ದಾವಣಗೆರೆ ಪ್ರಾಣಿದಯಾಜ್ಞಾನಪ್ರಸಾರಕ ಸಂಘದವರು ಏರ್ಪಡಿಸಿದ ಪ್ರಬಂಧಸ್ಪರ್ಧೆಯಲ್ಲಿ ಭಾಗವಹಿಸಿ 'ಗೋಸಂರಕ್ಷಣೆ' ಎಂಬ ಪ್ರಬಂಧವನ್ನು ಬರೆದು, ಪ್ರಥಮ ಬಹುಮಾನವನ್ನು ಪಡೆದರು; ಮತ್ತು ಧಾರವಾಡದ ಜಯಕರ್ನಾಟಕ ಸಂಪಾದಕರು ಏರ್ಪಡಿಸಿದ ಸ್ಪರ್ಧೆಯಲ್ಲಿಯೂ ಭಾಗವಹಿಸಿ ಬಹುಮಾನವನ್ನು ಪಡೆದರು.

ಮುಂದೆ ಬೆಂಗಳೂರಿನಲ್ಲಿರುವ ದಾಸಕೂಟದ ಗುರುಗಳಾದ ಶ್ರೀಮಾನ್ ತಂದೆ ಮುದ್ದುಮೋಹನ ವಿಠಲಾಂಕಿತ ಪರಮಪ್ರಿಯ ಸುಬ್ಬರಾಯದಾಸರ ಪರಮಾನುಗ್ರಹಕ್ಕೆ ಪಾತ್ರರಾಗಿ ಅವರಿಂದ 'ಮಾರುತೀಶ ವಿಠಲ' ಎಂಬದಾಗಿ ಅಂಕಿತೋಪದೇಶವನ್ನು ಪಡೆದರು; ಮತ್ತು ಅವರನ್ನು ಶಕೆ ೧೮೫೬ನೇ ಭಾವ ಸಂವತ್ಸರದ ಕಾರ್ತಿಕ ಶುದ್ಧ ದಶಮಿ ಶುಕ್ರವಾರ ದಿವಸ ಕದರಮಂಡಲಗಿಗೆ ಕರೆಯಿಸಿಕೊಂಡು, ತಮ್ಮ ಮನೆಯಲ್ಲಿ ಅವರನ್ನು ಅನೇಕ ರೀತಿಯಿಂದ ಪೂಜಿಸಿ, ನಮಗೆಲ್ಲರಿಗೂ ಅಂಕಿತೋಪದೇಶವನ್ನು ಕೊಡಿಸಿದರು ಆ ಕಾಲಕ್ಕೆ ಇವರು ಗುರುಗಳಿಗೆ ಅರ್ಪಿಸಿದ ಪದ್ಯರೂಪೀ ನವರತ್ನಮಾಲೆಯು ಇವರಲ್ಲಿದ್ದ ಗುರುಭಕ್ತಿಯನ್ನೂ, ಕವಿತ್ವಶಕ್ತಿಯನ್ನೂ, ವರ್ಣನಾಸಾಮರ್ಥ್ಯವನ್ನೂ ಚೆನ್ನಾಗಿ ವ್ಯಕ್ತಪಡಿಸುವಂತಿರುವದರಿಂದ ಅದನ್ನು ಈ ಕೆಳಗೆ ಕೊಟ್ಟಿದ್ದೇನೆ:

ಕಂದ| ಶ್ರೀ ಲಕುಮಿಸೇವ್ಯ ಪಾದಂ |
ಬಾಲಕನೆಂದೆನಿಸಿ ಶಕಟನೊತ್ತಿದ ಪಾದಂ ||
ಕಾಳಿಯನೆ ತುಳಿದ ಪಾದಂ |
ಪಾಲಿಕೆಮಂಗಳವನಿತ್ತು ಭಕ್ತರ ಸತತಂ ||೧||
ಇಳೆಯೊಳತಿ ಪೂತಮೆನಿಪಾ |
ಕಲಿನರಸೀಪುರದೆ ಜನಿಸಿ ಶೇಷಾಂಶದಲೀ ||
ಎಳೆತನದೆ ದಾಸಕೂಟದ |
ಪೊಳೆಯೊಳಗೀಸುತ್ತ ಪೋದರೇಂ!! ಸುಕೃತಿಗಳೋ ||೨||
ವರದೇವರಾಯದುರ್ಗದ |
ನರಸಿಂಹನದಯದೆ ದಾಸಕೂಟದ ಸಭೆಯಂ ||
ವಿರಚಿಸಿ ಸಜ್ಜನ ಸೇವೆಯೊ |
ಳಿರುತಂ ಪರಮಾರ್ಥಚಂದ್ರನಂ ಪಸರಿಸಿದಂ ||೩||
ಶ್ರೀ ವಿಜಯದಾಸವರ್ಯರ |
ಸೇವಕರುನ್ನತಿಯ ಮುದ್ದುಮೋಹನರಿಂಗೆ ||

ಪೂರ್ವದ ಋಷಿಯೋಲ್ ಶಿಷ್ಯರು ।
ಕೋವಿದರೀತಂದೆ ಮುದ್ದುಮೋಹನರಾದರ್ ॥೪॥
ಗಳಿಸುತ ಶಿಷ್ಯಸಮೂಹವ ।
ಕಳೆದುಂಬಿದ ಬೆಂಗಳೂರ ನಗರದಿ ನಿಂದು ॥
ಬಲುಬೋಧನೆಯಿಂ ಸುಜನರ ।
ಕಲುಷವ ಕಳೆಯುತ್ತಲಮೃತವರ್ಷವಗರೆದರ್ ॥೫॥
ಇಲ್ಲದಿರೆ ದೇಹಕಂಕಿತ ।
ಸಲ್ಲದುತಾಸಲ್ಲದೆನುತಲುಪದೇಶಿಸುತಂ ॥
ಫುಲ್ಲಲೋಚನನ ಕೃಪೆಯಿಂ ।
ದೆಲ್ಲರ್ಗಂಕಿತವನಿತ್ತು ದಯದೋರಿದರ್ರೈ ॥೬॥
ಸುಗುಣಗಣಾಂಬುಧಿ ಚಂದ್ರಂ ।
ಭಗವದ್ಭಕ್ತಾಗ್ರಗಣ್ಯಪುರುಷರೊಳಿಂದ್ರಂ ॥
ಜಗವರಿಯಲ್ಕಭಿಜಾತಂ ।
ಭೃಗುವಂಶಜ ದಾಸರಾಯುಸುಮನೋತ್ತಂಸಂ ॥೭॥
ಹರಿಯೊಲ್ಮೆಯಿಂದವ-ತಿಶಯ ।
ಹರಿತೇಜದಿ ನೊಪ್ಪಿ ಹರಿಯನಾಮಾಭಿದರಿಂ ॥
ಹರಿಕಥೆಯಃನಮೃತಸಾರವ।
ಹರಿಯಿಸಿದಂ ಹರಿಯಿದಲ್ತೆ! ಕರ್ನಾಟಕದೊಳ್ ॥೮॥
ಕದರೂರೇಶನ ಕರುಣವೊ ।
ಸದಮಲಗುರುಹಿರಿಯರತಿಯಪುಣ್ಯದ ಫಲವೊ ॥
ಒದಗಿಬಂದೆನ್ನಗುರುಗಳ್ ।
ಸದನದಿಸದನಿತ್ತು ಕುಲವನುದ್ಧರಿಸಿದರ್ರೈ ॥೯॥
ಗುರುದೈವಶಿಷ್ಯಕೋಟಿಗೆ ।
ಗುರುವೇ ತಾರಕನು ಘೋರಸಂಸ್ಕೃತಿಗೆಂದುಂ ॥
ಗುರುಚರಣಕ್ಕರ್ಪಿಪೆನೀ ।
ನುರುತರನವರತ್ನಮಾಲೆಯಂ ಭಕ್ತಿಯೊಳು ॥೧೦॥
ಸೇರುಗೆ ಸಕಲೈಶ್ವರ್ಯವು ।
ಸೇರುಗೆಯುನ್ನಂತ ದಾಯುರಾರೋಗ್ಯಗಳು ॥
ಸೇರುಗೆಗುರುಗಳ್ಗಿನುತವೆ ।
ಕೋರುವೇನಾಮಾರುತೀಶವಿಠ್ಠಲಗನಿಶಂ ॥೧೧॥

ಇದರಂತೆಯೇ ಇನ್ನೂ ಅನೇಕ ಪದ-ಪದ್ಯಗಳನ್ನು 'ಮಾರುತೀಶ ವಿಠಲ' ಎಂಬ ಅಂಕಿತದಿಂದಲೇ ರಚಿಸಿದ್ದಾರೆ. ಅವುಗಳೆಲ್ಲವೂ ಬಹಳೇ ಸುಂದರವಾಗಿಯೂ ಭಗವದ್ಭಕ್ತಿಪೂರಿತವಾಗಿಯೂ ಇರುವವು. ಅವೆಲ್ಲವುಗಳನ್ನೂ ಕೂಡಿಸಿ ಬೇರೊಂದು ಪುಸ್ತಕವನ್ನೇ ಪ್ರಕಟಿಸಬೇಕೆಂಬ ಆಶೆಯಿದೆ.

ಇನ್ನು ಇವರು ರಚಿಸಿದ ಗ್ರಂಥಗಳನ್ನಷ್ಟು ವಿವರಿಸಿ ಈ ಚಿಕ್ಕ ಲೇಖನವನ್ನು ಮುಗಿಸುತ್ತೇನೆ.

ಮೊದಲನೆಯ ಗ್ರಂಥ:—'ಕದರಮಂಡಲಗಿಯ ಶ್ರೀ ಹನುಮದಾಸರು' ಎಂಬದು. ಇದರಲ್ಲಿ ಕದರಮಂಡಲಗಿಯಲ್ಲಿ ಕ್ರಮವಾಗಿ ಆಗಿ ಹೋದ ಶ್ರೀ ಹಿರೇ ಆಚಾರ್ಯರು, ಶ್ರೀ ರಾಮದಾಸರು, ಶ್ರೀ ಶ್ರೀನಿವಾಸದಾಸರು ಎಂಬ ಮೂವರು ಭಗವದ್ಭಕ್ತರ ಚರಿತ್ರಗಳು ಸುಂದರವಾಗಿ ವರ್ಣಿಸಲ್ಪಟ್ಟಿವೆ. ಇದು ಮೊದಲು ಆನಂದವನದ ಸದ್ಬೋಧ ಚಂದ್ರಿಕೆಯಲ್ಲಿ ಪ್ರಕಟವಾಗಿತ್ತು. ಪ್ರತಿಗಳು ತೀರಿದ್ದರಿಂದ ಬೆಂಗಳೂರಿನಲ್ಲಿರುವ ಗುರುವರ್ಯ ತಂದೆ ಮುದ್ದುಮೋಹನ ವಿಠಲದಾಸರಾಯರು ಒಬ್ಬೊಬ್ಬರ ಚರಿತ್ರೆಯನ್ನೇ ಬೇರೆ ಬೇರೆಯಾಗಿ ಪ್ರಕಟಿಸಿರುವರು.

ಎರಡನೆಯ ಗ್ರಂಥವೇ:—'ಈ ಕನಕಮಹಿಮಾದರ್ಶ' ವೆಂಬದು. ಇದರಲ್ಲಿ ಕಾಗಿನೆಲ್ಲಿಯಲ್ಲಿ ನೆಲಿಸಿ ಪ್ರಸಿದ್ಧ ಭಗವದ್ಭಕ್ತನಾದ ಕನಕದಾಸನ ಚರಿತ್ರವು ಸುಂದರವಾಗಿ ವರ್ಣಿಸಲ್ಪಟ್ಟಿದೆ. ಇದಾದರೂ ಮೊದಲು ಸದ್ಬೋಧ ಚಂದ್ರಿಕೆಯಲ್ಲಿಯೇ ಪ್ರಸಿದ್ಧವಾಗಿತ್ತು.

ಮೂರನೆಯ ಪುಸ್ತಕವು:—'ಹೆಳವನಕಟ್ಟೆ ಗಿರಿಯಮ್ಮ'ನ ಚರಿತ್ರವು. ಇದರಲ್ಲಿ ಮೈಸೂರ ಸೀಮೆಯೊಳಗಿನ ಕೊಮಾರನಹಳ್ಳಿ ಎಂಬ ಊರಲ್ಲಿ ಆಗಿ ಹೋದ ರಂಗನಾಥನ ಭಕ್ತಳಾದ ಗಿರಿಯಮ್ಮ ಎಂಬ ಭಗವದ್ಭಕ್ತಳ ಚರಿತ್ರವು ಹೃದಯಂಗಮವಾಗಿ ವರ್ಣಿತವಾಗಿದೆ.

ನಾಲ್ಕನೆಯದು:—ಶ್ರೀಮದ್ರಾಘವೇಂದ್ರಗುರುಕಥಾಮೃತ ವೆಂಬದು. ಇದರಲ್ಲಿ ಮಂತ್ರಾಲಯುಮಠದ ಶ್ರೀರಾಘವೇಂದ್ರಸ್ವಾಮಿಗಳವರ ದಿವ್ಯ ಚರಿತ್ರವು ಅನೇಕ ಮಹಿಮಾವಿಶೇಷಗಳಿಂದ ಕೂಡಿ ವರ್ಣಿಸಲ್ಪಟ್ಟಿದೆ. ಇದು ಮೊದಲು ಸದ್ಬೋಧ ಚಂದ್ರಿಕೆಯಲ್ಲಿ ಪ್ರಕಟವಾಗಿತ್ತು. ನಂತರ ಇದರಲ್ಲಿ ಮತ್ತೆ ಕೆಲವು ವಿಷಯುಗಳನ್ನು ಹೊಸದಾಗಿ ಸೇರಿಸಿ, ಎರಡನೇ ಆವೃತ್ತಿಯನ್ನು ತೆಗೆದಿದ್ದಾರೆ. ಇದರ ಪ್ರತಿಗಳು ಈಗ ನಮ್ಮಲ್ಲಿ ಸಿಗುತ್ತಿದ್ದು ಬೇಕಾದವರು ತರಿಸಿಕೊಳ್ಳಬಹುದು.

ಐದನೆಯದು:—'ಶ್ರೀ ಸತ್ಯಸಂಧಕಥಾಮೃತ'ವು. ಇದರಲ್ಲಿ ಉತ್ತರಾದಿ

ಮಠದ ಶ್ರೀ ಸತ್ಯಸಂಧಸ್ವಾಮಿಗಳವರ ಚರಿತ್ರವೂ ಮಹಿಷಿಕ್ಷೇತ್ರ ಮಹಾತ್ಮ್ಯೆಯೂ ಸುಂದರವಾಗಿ ಬರೆಯಲ್ಪಟ್ಟಿವೆ. ಇದಾದರೂ ಸದ್ಬೋಧ ಚಂದ್ರಿಕೆಯಲ್ಲಿಯೇ ಪ್ರಸಿದ್ಧವಾಗಿದೆ.

ಆರನೆಯದು:—'ಶ್ರೀಪಾದರಾಜ ಕಥಾಮೃತ' ಅಥವಾ 'ದಾಸಕೂಟದ ಅರುಣೋದಯವೆ'ಂಬದು. ಇದರಲ್ಲಿ ಮುಳಬಾಗಿಲಮಠದ ಶ್ರೀಪಾದರಾಯ ಸ್ವಾಮಿಗಳವರ ಚರಿತ್ರೆಯೂ ಮಹಿಮಾವಿಶೇಷಗಳೂ ಬಣ್ಣಿಸಲ್ಪಟ್ಟಿವೆ ಇದಾದರೂ ಸದ್ಬೋಧ ಚಂದ್ರಿಕೆಯಲ್ಲಿಯೇ ಪ್ರಕಟವಾಗಿದೆ.

ಏಳನೆಯದು:—'ಶ್ರೀ ಕೃಷ್ಣಲೀಲಾಮೃತವೆ'ಂಬ ಪುಸ್ತಕವು. ಇದರಲ್ಲಿ ಕನ್ನಡ ಕವಿ ರುದ್ರಭಟ್ಟನಿಂದ ವಿರಚಿತವಾದ ಜಗನ್ನಾಥವಿಜಯದಲ್ಲಿ ವರ್ಣಿಸಲ್ಪಟ್ಟ ಶ್ರೀಕೃಷ್ಣಚರಿತ್ರೆಯನ್ನೇ ಬಹಳೇ ಸುಂದರವಾಗಿ, ಚಿಕ್ಕಮಕ್ಕಳಿಗೂ ತಿಳಿಯುವಂತೆ ಉತ್ತಮ ತಿಳಿಗನ್ನಡದಲ್ಲಿ ವರ್ಣಿಸಿದ್ದಾರೆ. ಇದು ಮಾಲತೀಶ ವಿಜಯವೆಂಬ ಮಾಸಿಕದಲ್ಲಿ ಪ್ರಕಟವಾಗಿತ್ತು.

ಎಂಟನೆಯದು:--'ಗೋಸಂರಕ್ಷಣೆ' ಎಂಬ ಪ್ರಬಂಧವು. ಇದರಲ್ಲಿ ಗೋಸಂರಕ್ಷಣೆಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ಅನೇಕ ಶಾಸ್ತ್ರಾಧಾರಗಳಿಂದ ಪ್ರತಿಪಾದಿಸಿರುವರು. ಇದಕ್ಕೆ ದಾವಣಗೇರಿಯ ಪ್ರಾಣಿದಯಾಜ್ಞಾನ ಪ್ರಸಾರ ಸಂಘದವರು ಇಪ್ಪತ್ತೈದು ರೂಪಾಯಿ ಬಹುಮಾನ ಕೊಟ್ಟಿರುವರು; ಮತ್ತು ಅವರೇ ಇದನ್ನು ಮುದ್ರಿಸಿ ಪ್ರಸಿದ್ಧಿಸಿರುವರು.

ಒಂಬತ್ತನೆಯದು:—"ದಾಸಕೂಟರತ್ನಾಕರ" ಎಂಬದು. ಇದರಲ್ಲಿ ಸುಮಾರು ನೂರಾಐವತ್ತು ಜನ ದಾಸರಾಯರ ಚರಿತ್ರಗಳು ಅನೇಕ ಪ್ರಮಾಣಗಳಿಂದ ಕಾಲ ನಿರ್ಣಯ ಮಾಡಿ ಬರೆಯಲ್ಪಟ್ಟಿವೆ. ಇದು ಸುಮಾರು ಮೂರು ನೂರು ಪುಟಗಳ ದೊಡ್ಡ ಗ್ರಂಥವಿದ್ದು ಇನ್ನೂ ಮುದ್ರಿತವಾಗಿರುವದಿಲ್ಲ. ಇದನ್ನು ಮುದ್ರಿಸಬೇಕೆಂಬ ಆಶೆಯು ಅವರಿಗೆ ಬಹಳವಾಗಿತ್ತಾದರೂ ಆರ್ಥಿಕ ಅನನುಕೂಲತೆಯ ದೆಸೆಯಿಂದ ಇದುವರೆಗೂ ಅವರ ಆಶೆಯು ಈಡೇರಲಿಲ್ಲ. ಈಗಲಾದರೂ ಯಾರಾದರು ಮಹನೀಯರು ಆಶ್ರಯ ಕೊಟ್ಟು, ಮುದ್ರಿಸಿ, ಪ್ರಸಿದ್ಧಿಸುವ ಹೊಣೆಯನ್ನು ಹೊತ್ತರೆ, ನಾನು ಸಂತೋಷದಿಂದ ಆ ಪುಸ್ತಕವನ್ನು ಕೊಡುತ್ತೇನೆ. ಅಂಥ ಮಹನೀಯರಾರಾದರೂ ಇದ್ದಲ್ಲಿ ಅವರು ನನ್ನ ಸಂಗಡ ಪತ್ರವ್ಯವಹಾರ ಮಾಡಬೇಕೆಂದು ಬೇಡುತ್ತೇನೆ.

ಈ ಪ್ರಕಾರವಾಗಿ ಇಷ್ಟು ಗ್ರಂಥಗಳನ್ನು ಬರೆದದ್ದಲ್ಲದೆ 'ಕರ್ನಾಟಕ ಗಂಗಾಲಹರಿ' ಎಂಬದೊಂದು ಸುಂದರ ಕಾವ್ಯವನ್ನು ರಚಿಸಿರುವರು. ಇದರ ಸವಿಯನ್ನಂತೂ ಇದನ್ನು ಓದಿಯೇ ಸವಿಯಬೇಕು. ಇದು ಮೈಸೂರಲ್ಲಿ

ಹೊರಡುತ್ತಿದ್ದ ಕಾದಂಬರೀ ಸಂಗ್ರಹವೆಂಬ ಮಾಸಿಕದಲ್ಲಿ ಪ್ರಕಟವಾಗಿದೆ. ಇದರ ಪ್ರತಿಗಳು ಈಗ ಸಿಗದಂತಾಗಿವೆ. ಆದ್ದರಿಂದ ಎರಡನೇ ಆವೃತ್ತಿಯನ್ನು ತೆಗೆಯಬೇಕಾಗಿದೆ.

ಇವಲ್ಲದೆ ಇನ್ನೂ ಎಷ್ಟೋ ಪದ ಪದ್ಯಗಳನ್ನು 'ಮಾರುತೀಶವಿಠಲ' ಎಂಬ ಅಂಕಿತದಿಂದ ರಚಿಸಿರುವರೆಂಬದನ್ನು ಹಿಂದೆಯೇ ಹೇಳಿದ್ದೇನೆ.

ಹೀಗೆ ಅನೇಕ ಗ್ರಂಥಗಳನ್ನು ಬರೆದೂ ಪದ ಪದ್ಯಗಳನ್ನು ರಚಿಸಿಯೂ ಕರ್ನಾಟಕ ಭಾಷಾಮಾತೆಯ ಸೇವೆಯನ್ನು ಇರುವ ವರೆಗೂ ಅವ್ಯಾಹತವಾಗಿ ಮಾಡಿ ಕಡೆಗೆ ನಮ್ಮೆಲ್ಲರನ್ನು ಅನಾಥರನ್ನಾಗಿಯೂ ಅಪಾರ ದುಃಖಸಾಗರದಲ್ಲಿ ಮುಳುಗುವಂತೆಯೂ ಮಾಡಿ ಶಾಲಿವಾಹನ ಶಕದ ೧೮೫೯ನೆಯ ಈಶ್ವರಸಂವತ್ಸರದ ಫಾಲ್ಗುಣ ಬಹುಳ ಚತುರ್ದಶಿ ಬುಧವಾರ (ತಾರೀಖು ॥ ೩೦-೩-೧೯೩೭) ದಿವಸ ಪರಂಧಾಮವನ್ನೈದಿದರು! ಇವರು ಮೃದುಸ್ವಭಾವಿಗಳೂ ವಿನಯಶೀಲರೂ ಆಗಿದ್ದರಲ್ಲದೆ, ಕನ್ನಡ ಭಾಷೆಯಲ್ಲಿ ನುರಿತ ಲೇಖಕರೂ ಉತ್ತಮ ಕವಿಗಳೂ ಆಗಿದ್ದರು. ಇಂಥವರ ಮರಣದಿಂದ ಕರ್ನಾಟಕಕ್ಕೆ ಅಪಾರವಾದ ಹಾನಿಯುಂಟಾಗಿದೆ, ಎಂದು ಹೇಳಬಹುದು. ಪರಮಾತ್ಮನು ಇವರಿಗೆ ನಿರಂತರ ಮುಕ್ತಿಯನ್ನು ಕೊಡಲೆಂದೂ ನಮ ಕನ್ನಡನಾಡಿನಲ್ಲಿ ಇಂಥ ಕವಿಗಳೂ ಲೇಖಕರೂ ಅಸಂಖ್ಯಾಕವಾಗಿ ಉದಯಿಸುವಂತೆ ಅನುಗ್ರಹಿಸಲೆಂದೂ ಆ ಜಗನ್ನಿಯಂತನನ್ನೇ ಅನನ್ಯಭಾವದಿಂದ ಪ್ರಾರ್ಥಿಸಿ, ಈ ಲೇಖವನ್ನು ಮುಗಿಸುತ್ತೇನೆ.

———